

# ಗುಲಾಬಿನಗರ ಜಯಪುರ

## ಪಾರದರ್ಶಿಕೆ-ಚಿತ್ರ-ಲೇಖನ

ಎನ್. ಸಿ. ದೇಸಾಯಿ.

ರಾಜಸ್ಥಾನ ಪ್ರವಾಸಿಕರಿಗೊಂದು ಸ್ವರ್ಗವೋ ಎಂಬುವಷ್ಟು ಅಂದವಾದ ನಾಡು. ಅಲ್ಲಿಯ ಜನ, ಅವರ ವೇಷಭೂಷ, ನಡೆನುಡಿ, ಕಲೆ, ಗ್ರಾಮ್ಯಕಲೆ, ಲೋಕಗೀತೆ, ಲೋಕನೃತ್ಯ ಎಲ್ಲವೂ ಒಂದು ರೀತಿ ಭಿನ್ನ – ಒಂದು ವಿಶೇಷ. ಅವೆಲ್ಲ ಇಂದಿಗೂ ಹಾಗೆಯೇ ಉಳಿದು ಬೆಳೆದುಕೊಂಡು ಬಂದಿವೆ. ಇಲ್ಲಿಯ ವಾಸ್ತುಶಿಲ್ಪದ ರೀತಿಯೂ ಅಷ್ಟೇ ವಿರಳ. ರಾಜಸ್ಥಾನದ ಈ ವಿಶೇಷಗಳು ಪ್ರವಾಸಿಕನನ್ನು ಕೈಮಾಡಿ ಕರೆಯುತ್ತವೆ, ಪರದೇಶದ ಪ್ರವಾಸಿಗಳಂತೂ, ಈ ಪ್ರದೇಶದಲ್ಲಿ ತಿರುಗಾಡಲು ಮುಗಿಬೀಳುತ್ತಾರೆ. ವರ್ಷದ ಯಾವ ಕಾಲದಲ್ಲೂ ಇಲ್ಲಿಯ ಯಾವ ಭಾಗದಲ್ಲೂ ಇವರನ್ನು ಕಾಣಬಹುದು.

1 ಜಯಪುರದ ಸಿಟಿ ಪ್ಯಾಲೇಸ್ – ಚಂದ್ರಮಹಲ್.

2 ಪರಿಪೂರ್ಣ ವರ್ಣಮಯ ಗಾಜುಗಳಿಂದಲಂಕೃತವಾದ ಶೀಷಮಹಲ್‌ನ ಒಂದು ಗೋಡೆಯ ಹತ್ತಿರದ ಚಿತ್ರ.

3 ಚಂದ್ರಮಹಲ್ : ಈ ಕಟ್ಟಡದ ಒಂದು ಭಾಗದಲ್ಲಿ ಇಂದಿಗೂ ಅರಸು ವಂಶದವರು ವಾಸಿಸುತ್ತಿದ್ದಾರೆ. ರಾಜಕಾರಣಿ ಗಾಯತ್ರೀದೇವಿ ಈ ವಂಶದವರು.

3





# ಗುಲಾಬಿನಗರ ಜಯಪುರ

**ಜಯಪುರ**

ಜಯಪುರವೇ ಈ ನಾಡಿನ ರಾಜಧಾನಿ, ಇಲ್ಲಿ ಶಹರದ ಬೆಡಗನ್ನು, ಹಳ್ಳಿಯ ಛಾಯೆಯನ್ನು ಸರಿಸಮಾನವಾಗಿಕಾಣುತ್ತೇವೆ, ಹಳ್ಳಿಗರು ಇಲ್ಲಿಗೆ ಬರುತ್ತಾರೆ, ಬಂದಾಗ ಅವರು ತಮ್ಮ ಸಾಂಪ್ರದಾಯಿಕ ವೇಷ ಧರಿಸುತ್ತಾರೆ. ಅವರ ಪ್ರೀತಿಯ ಪ್ರಾಣಿ ಒಂಟೆಯೇ ವಾಹನ – ಮಹಿಳೆಯರು ಧರಿಸಿದ ಬಣ್ಣ ಬಣ್ಣದ ವೇಷ, ವಿಚಿತ್ರ ರೀತಿ ರೀತಿಯಲ್ಲಿಯ – ಹೆಚ್ಚಾಗಿ ಬೆಳ್ಳಿಯ ಆಭರಣಗಳು ಕಣ್ಣಿಗೆ ಹಬ್ಬ.

ಈ ಪುರದ ನಿರ್ಮಿತಿಗೂ ಒಂದು ಇತಿಹಾಸ. ಇಲ್ಲಿ ಆಗ ಆಳುತ್ತಿದ್ದ ಕಛವಾ ರಾಜಮನೆತನದವರ ಅಂದಿನ ರಾಜಧಾನಿಯಿದ್ದುದು 'ಅಮೇರ'ದಲ್ಲಿ, ಎತ್ತರದ ಗುಡ್ಡದ ಮೇಲೆ. ಇಂದಿನ ಜಯಪುರಕ್ಕೆ ಏಳು ಮೈಲಿ (11 ಕಿ.ಮಿ.) ಅಂತರದಲ್ಲಿಯೇ ಇದೆ, ಈ ಆಳರಸರಲ್ಲಿ ಸವಾಯಿ ಜಯಸಿಂಗರು (ದ್ವಿ) ಒಬ್ಬ ಪ್ರಮುಖ ರಾಜರು. ಅವರು ಪಟ್ಟಕ್ಕೆ ಬಂದುದು ಕ್ರಿ. ಶ. 1699ರಲ್ಲಿ. ದಿನಗಳೆದಂತೆ 'ಅಮೇರ' ಅರಮನೆ, ತಮ್ಮ ಚಟುವಟಿಕೆಗಳಿಗೆ ಅಷ್ಟು ಅನುಕೂಲವಲ್ಲವೆಂದು ಎಣಿಸಿಯೋ ಏನೋ, ಜಯಸಿಂಗರು ಹೊಸ ರಾಜಧಾನಿಯನ್ನು ಬಯಲುಸೀಮೆಯಲ್ಲಿ ನಿರ್ಮಿಸುವ ವಿಚಾರ ಮಾಡಿದರು, 1727ರ ಹೊತ್ತಿಗೆ ಅವರ ವಿಚಾರ ಮೂರ್ತಸ್ವರೂಪಕ್ಕೆ ಬಂದಿತ್ತು. ಅವರು ಹೊಸ ರಾಜಧಾನಿಯನ್ನಷ್ಟೇ ಕಟ್ಟಬೇಕೆಂದಿರಲಿಲ್ಲ; ಒಂದು ಸುಂದರ ನಗರವನ್ನೂ ನಿರ್ಮಿಸ ಬಯಸಿದರು. ಅಂತೆಯೇ ನಗರಕ್ಕಾಗಿ ನಕ್ಷೆಗಳನ್ನು ಪರದೇಶಗಳಿಂದಲೂ ತರಿಸಿದರು. ಅಂತಹ ಕೆಲ ಉತ್ತಮ ನಕ್ಷೆಗಳಲ್ಲಿ ಆಯ್ದ ನಕ್ಷೆಯಿಂದ ನಿರ್ಮಾಣವಾದ ನಗರವೇ ಇದು. ಇನ್ನೊಂದು ಮಹತ್ವದ ವಿಷಯ ಗಮನಿಸುವಂತಹದು, ಜಯಸಿಂಗರು ಶೂರ ರಾಜರಷ್ಟೇ ಆಗಿರಲಿಲ್ಲ; ಅವರಿಗೆ ಜ್ಯೋತಿಷ್ಯಶಾಸ್ತ್ರ ಖಗೋಲ ಶಾಸ್ತ್ರಗಳಲ್ಲಿ ಇನ್ನಿಲ್ಲದ ಆಸಕ್ತಿ. ಅಂತಲೇ ಈ ವಿಷಯಗಳಿಗೆ ಸಂಬಂಧಿಸಿದ ವೇಧಶಾಲೆಗಳೂ ಅರಮನೆಯ ಪಕ್ಕದಲ್ಲಿಯೇ ನಿರ್ಮಾಣವಾಗಿವೆ. 1727ರಲ್ಲಿ ಪ್ರಾರಂಭವಾದ ಈ ನಗರಕ್ಕೆ ಜಯಸಿಂಗರದೇ ಹೆಸರು "ಜಯಪುರ"

1



2



1 ಜಯಪುರ, ಜಂತರ್-ಮಂತರ್ ನಿರ್ಮಾತೃ ಮಹಾರಾಜಾಸವಾಯಿ ಜಯಸಿಂಹ.

2 ಸಿಟಿ ಪ್ಯಾಲೇಸ್‌ನಲ್ಲಿಯ ಒಂದು ಪ್ರವೇಶದ್ವಾರ.

3 ಚಂದ್ರಮಹಲಿನ ಒಂದು ದ್ವಾರದ ಸಮೀಪ ನೋಟ.

3



"ಗುಲಾಬಿನಗರ"

ಇಂದಿನ ಜಯಪುರ ಬೃಹದಾಕಾರವಾಗಿ ಬೆಳೆದಿದೆ. ಅಂದು ಜಯಸಿಂಗರು ನಿರ್ಮಿಸಿದ ಭಾಗವನ್ನು ಮಾತ್ರ ಇಂದಿಗೂ "ಪಿಂಕ್ ಸಿಟಿ" (ಗುಲಾಬಿನಗರ) ಎಂದು ಕರೆಯಲಾಗುತ್ತದೆ. ಇಲ್ಲಿಯ ಕಟ್ಟಡಗಳ ಹೊರಮೈ ಕೆಂಪು ಬಣ್ಣವನ್ನು ಹೊತ್ತು ನಿಂತಿವೆ. ಅವುಗಳ ಮೇಲೆ ರಾಜಸ್ಥಾನಿ ಪದ್ಧತಿಯಲ್ಲಿ ನಿರ್ಮಿಸಿದ ಬಿಳುಪು ನಕ್ಷೆಗಳು ಕಣ್ಣಿಗೆ ಅಂದವಾಗಿ ಕಾಣುತ್ತವೆ.

ರಾಜಮಾರ್ಗಗಳ ವಿಸ್ತೀರ್ಣ 110 ಅಡಿ, ಚಿಕ್ಕವು 55 ಅಡಿ. ಈ ನಗರದ ಸುತ್ತ ಸಾಧಾರಣ 20 ಅಡಿ ಎತ್ತರದ ಕೋಟೆ, ಅದು 7 ಅಡಿ ದಪ್ಪವಾದುದು. ಈ ಕೋಟೆಗೆ ಎಂಟು ಪ್ರವೇಶ ದ್ವಾರಗಳು. ಈ ಭಾಗದಲ್ಲಿಯೂ ಇಂದು ಹೊಸ ಛಾಯೆಯನ್ನು ಕಾಣುತ್ತೇವೆ. ರಾಜಸ್ಥಾನಿ ಹಸ್ತಕಲೆಯ - ಅಂಗಡಿಗಳು, ಇಲ್ಲಿಯದೇ ಆದ ವಿಶಿಷ್ಟ ರೀತಿಯ ಬಟ್ಟೆಯ ಮಾರುಕಟ್ಟೆಗಳು ಆವರಿಸಿವೆ.

1 ಆಳೆತ್ತರದ ಬೆಳ್ಳಿ ಪಾತ್ರೆ. 'ಗಂಗಾಜಲ' ಬಿಟ್ಟು ಬೇರೆ ನೀರು ಕುಡಿಯದ ರಾಜರುಗಳಿಗಾಗಿ ಇಂಥ ಪಾತ್ರೆಗಳಲ್ಲಿ ಗಂಗಾಜಲ ಸಂಗ್ರಹಿಸಿಡಲಾಗುತ್ತಿತ್ತು. ಈಗ ವಸ್ತುಸಂಗ್ರಹಾಲಯದಲ್ಲಿದೆ.

2 ಮುಬಾರಕ್ ಮಹಲ್ : ಅತಿಥಿಗೃಹ. ಈಗ ರಾಜಮನೆತನದ ವಸ್ತುಸಂಗ್ರಹಾಲಯ.

3 ಅರಮನೆಯ ಒಳನೋಟದ ಒಂದು ಚಿತ್ರ. ಕಾರಂಜಿ, ಕಾಲುವೆಗಳು ಇಲ್ಲಿ ಹರಿದಿವೆ. ಆಳರಸರ ಚಿತ್ರಗಳಿಂದ ಅಲಂಕೃತವಾಗಿದೆ.



# ಗುಲಾಬಿನಗರ ಜಯಪುರ

## ಜಂತರ್‌ಮಂತರ್

ಸುಂದರ ಕಟ್ಟಡಗಳು, ಸಂಗಮವರಿ ಕಲ್ಲಿನಲ್ಲಿ ನಿರ್ಮಾಣವಾದ ಮಹಲುಗಳು. ವಿವಿಧ ನಕ್ಷೆಯಲ್ಲಿ ಸಿದ್ಧವಾದ ಇಮಾರತ್‌ಗಳು ಅಲ್ಲಲ್ಲಿ ಇವೆ. ಆಯಾ ಪ್ರದೇಶಕ್ಕೆ ಸಂಬಂಧಿಸಿದಂತೆ ಅವುಗಳ ನಕ್ಷೆ ವಿವಿಧವಾಗಿರಬಹುದು. ಆಕಾರದಲ್ಲಿ ಹೆಚ್ಚು ಕಡಿಮೆಯಾಗಿರಬಹುದು. ಆದರೆ ಅವೆಲ್ಲ ಸಾಮಾನ್ಯ. ಇಲ್ಲಿ ಮಹಾರಾಜಾ ಜಯಸಿಂಗರಿಂದ ನಿರ್ಮಾಣವಾದಂತಹ ಜ್ಯೋತಿಷ್ಯ – ಖಗೋಲ ಶಾಸ್ತ್ರಗಳ "ವೇಧಶಾಲೆ" (observatory) ಗಳು ಮಾತ್ರ ಯಾವ ರಾಜರೂ, ಯಾವ ಶಾಸ್ತ್ರಜ್ಞರೂ ಎಲ್ಲಿಯೂ ನಿರ್ಮಿಸಿಲ್ಲ. ಜಯಸಿಂಗರು ಎಷ್ಟು ಶೂರರೋ, ಎಷ್ಟು ಧೀರರೊ, ಚಾಣಾಕ್ಷರೋ, ಹಾಗೆಯೇ ಜ್ಯೋತಿಷ್ಯ-ಖಗೋಲ ಶಾಸ್ತ್ರಗಳಲ್ಲಿ ಅವರಿಗೆ ಇಲ್ಲದ ಆಸಕ್ತಿ. ಒಬ್ಬ ಮಹಾರಾಜರಲ್ಲಿ ಈ ತೆರನಾದ ಆಸಕ್ತಿಯನ್ನು ಕಂಡಾಗ ವಿಚಿತ್ರವೆನಿಸುತ್ತದೆ. ರಾಜಕಾರಣದ ಎಲ್ಲ ಭಾರಗಳನ್ನೂ ನಿಭಾಯಿಸುತ್ತಲೆ ಈ ವಿಷಯದತ್ತ ಅವರು ವಿಶೇಷ ಆಸ್ಥೆಯನ್ನು ತೋರಿದರು. ಅದನ್ನು ಕಂಡಾಗ ಒಂದಿಷ್ಟು ವಿಚಿತ್ರವೂ ಎನಿಸುತ್ತದೆ. ನಿಸರ್ಗದ ಮೂಲವನ್ನು, ಸೂರ್ಯ-ಚಂದ್ರ-ನಕ್ಷತ್ರಗಳ ಚಲನವಲನವನ್ನು ವೀಕ್ಷಿಸಲು ಪ್ರತ್ಯಕ್ಷ ವೇಧಶಾಲೆಗಳು ಆ ಮೊದಲು ಈ ದೇಶದಲ್ಲಂತೂ ಇರಲಿಲ್ಲ. ಅವನ್ನು ನಿರ್ಮಿಸಿದವರು ಜಯಸಿಂಗರು. ಅವರು ಇಂತಹ ಐದು ವೇಧಶಾಲೆಗಳನ್ನು ಬೇರೆ ಬೇರೆ ನಗರಗಳಲ್ಲಿ ನಿರ್ಮಿಸಿದ್ದಾರೆ – ಅವುಗಳಲ್ಲಿ ಜಯಪುರದ್ದೇ ಹಿರಿಯದು. ಇಲ್ಲಿ ಹೆಚ್ಚು ಯಂತ್ರಗಳಿವೆ – ನಕ್ಷತ್ರ ಮಂಡಲವನ್ನು ವೀಕ್ಷಿಸಲು ಪ್ರತ್ಯೇಕ ಭಾಗವಿದೆ. ಇದನ್ನವರು ಅರಮನೆಯ ಪಕ್ಕದಲ್ಲಿಯೇ ನಿರ್ಮಿಸಿದ್ದಾರೆ.


1

1 ಜಂತರ್-ಮಂತರ್‌ನಲ್ಲಿಯ ಒಂದು ಸೂರ್ಯಮಾಪಕ ಯಂತ್ರ – ಇದಕ್ಕೆ ಛತ್ರಿ ಎನ್ನುತ್ತಾರೆ.

2 ಇನ್ನೊಂದು ಸೂರ್ಯಮಾಪಕಯಂತ್ರ.

3 ಗ್ರಹಗತಿ ಇತ್ಯಾದಿ ಸೌರ ಲೆಕ್ಕಾಚಾರಕ್ಕಾಗಿ ವಿವಿಧ ರೀತಿ ಯಂತ್ರಗಳ 16 ಗುಂಪುಗಳಿವೆ. ಚಿತ್ರದಲ್ಲಿರುವುದು ಈ ಎಲ್ಲ ಯಂತ್ರಗಳನ್ನು ಹೇಗೆ ಬಳಸಬೇಕೆಂದು ತಿಳಿಸುವ ಲೋಹದ ಎರಕದಿಂದ ಮಾಡಿದ ಎರಡು ಜಾಗಟೆಗಳಲ್ಲಿ ಅಡಗಿರುವ 'ಯಂತ್ರರಾಜ'. ಜಯಸಿಂಗರು ಈ ಎಲ್ಲ ಯಂತ್ರಗಳ ಉಪಯೋಗದ ಬಗ್ಗೆ ಎರಡು ಬೃಹತ್ ಗ್ರಂಥ ಬರೆದಿದ್ದಾರೆ.

3



1 ಜಯಪುರದಿಂದ ಅಮೇರಕ್ಕೆ ಹೋಗುವ ಮಾರ್ಗದಲ್ಲಿ ಸಿಕ್ಕುವ ರಾಜರ ಸ್ಮಾರಕ ಗದ್ದುಗೆಗಳಲ್ಲೊಂದು.

2 ಸಿಟಿ ಪ್ಯಾಲೇಸಿನಲ್ಲಿ ಆಯುಧ ಸಂಗ್ರಹಾಲಯದಲ್ಲಿ ವರ್ತುಲಾಕಾರವಾಗಿ ಜೋಡಿಸಿದ ಹಳೆಯ ಬಂದೂಕು-ಬಾಣಗಳು.

3 ಆಲ್ಬರ್ಟ್ ಹಾಲ್ (ಈಗ ವಸ್ತು ಸಂಗ್ರಹಾಲಯ)ದಲ್ಲಿನ ನಕ್ಷೆಗಳಲ್ಲೊಂದರ ಸಮೀಪ ದೃಶ್ಯ.

4 ಜಯಪುರದ ಪ್ರಸಿದ್ಧ ಕಟ್ಟಡ ಹವಾ ಮಹಲ್.

ಸಿಟಿ ಪ್ಯಾಲೇಸ್

ಅಂದು ಆಳರಸರ 'ಅರಮನೆ' ಈಗ ಸಿಟಿ ಪ್ಯಾಲೇಸ್ ಎಂದು ಕರೆಯಲ್ಪಡುತ್ತಿದೆ (ಆಂಗ್ಲರ ಛಾಯೆಯೋ ಏನೋ). ಈ ಅರಮನೆಯ ಸುತ್ತಲೂ ಮತ್ತೊಂದು ಕೋಟೆ. ಏಳು ಪ್ರವೇಶಗಳು ಇದಕ್ಕೆ. ದಕ್ಷಿಣ ಭಾಗಕ್ಕೆ 'ತ್ರಿಪೋಲಿಯಾ' ಎಂಬ ದ್ವಾರವಿದೆ. ಪಶ್ಚಿಮಕ್ಕಿರುವ "ಸಿರಾ-ಕಿ-ದ್ಯೋಢಿ" ಎಂಬ ದ್ವಾರವೇ ಈ ಅರಮನೆಗೆ ಮುಖ್ಯ ಪ್ರವೇಶದ ಹಾದಿ. ಈ ಅರಮನೆಯ ಸುತ್ತುವರಿದ ಕಟ್ಟಡಗಳ ಭಾಗಕ್ಕೆ "ಜೆಲೆಬ ಚೌಕ್" ಎನ್ನುತ್ತಾರೆ. ಇಲ್ಲಿಯೇ ರಾಜಮನೆತನದವರಕಾಲದಲ್ಲಿ ಅವರ ಕಚೇರಿಗಳು, ವೈಯಕ್ತಿಕ ನಿವಾಸಗಳೂ ನೆಲೆಸಿದ್ದವು.

ಈ ನಿವಾಸಗಳ ಮಧ್ಯ ದಿವಾನ್-ಇ-ಖಾಸ್-ಇದೆ. ಇದು ರಾಜಮನೆತನದವರು ಕಲೆಯುವ ಸ್ಥಾನ. ಅವರು ಹಬ್ಬಹುಣ್ಣಿಮೆಯನ್ನು ಆಚರಿಸುತ್ತಿದ್ದ ತಾಣ. ಈಗ ಅದು ಒಂದು ವಸ್ತು ಸಂಗ್ರಹಾಲಯ.

**ದಿವಾನ್ ಈ - ಆಮ್/ಚಂದ್ರಮಹಲ್**

ಈ ಕಟ್ಟಡ ಪ್ರಜೆಗಳೊಡನೆ ಕಲೆಯುವ ಜಾಗ. ಅಂದವಾಗಿ ಸಂಗಮವರಿ ಕೆತ್ತನೆಯ ಕಂಭಗಳೊಂದಿಗೆ ನಿರ್ಮಾಣವಾದುದು. ಕಂಭ, ಛತ್ತುಗಳೆಲ್ಲ ಚಿನ್ನದ ಬೆಳ್ಳಿಯ ನಕ್ಷೆಯಲ್ಲಿ ಸಿದ್ಧವಾದುವು. ಜಯಪುರ ಪದ್ಧತಿಯ ನಕ್ಷೆ ಇಲ್ಲಿ ಎದ್ದು ಕಾಣುತ್ತದೆ. ಇಂದು ಈ ಸಭಾಗೃಹ ರಾಜಮನೆತನದ ಖಾಸಗಿ, ಚಿತ್ರ-ಸಾಹಿತ್ಯಗಳ ಸಂಗ್ರಹಾಲಯ. ರಾಜಮನೆತನದವರು ಶೇಖರಿಸಿದ ಹಳೆಯ ಹಸ್ತಲಿಖಿತ ಗ್ರಂಥಗಳ ಸಂಗ್ರಹವೂ ಇಲ್ಲಿದೆ. ಈ ಕಟ್ಟಡದ ಪಕ್ಕದಲ್ಲಿಯೇ ಇರುವುದು 'ಚಂದ್ರ ಮಹಲ್'- ಏಳು ಅಂತಸ್ತಿನ ಕಟ್ಟಡ.

4





# ಗುಲಾಬಿನಗರ ಜಯಪುರ

ಈ ಕಟ್ಟಡ ಒಮ್ಮೆಲೇ ನಿರ್ಮಾಣವಾದುದಲ್ಲ. ಈ ರಾಜಮನೆತನಕ್ಕೆ ಸೇರಿದ ಬೇರೆ ಬೇರೆ ಆಳರಸರು ಆಗಾಗ ಬೆಳೆಸಿದ ಕಟ್ಟಡವಿದು. ಈ ಕಾರಣದಿಂದ, ಇಲ್ಲಿಯ ಅಲಂಕಾರವು ಒಂದಿಷ್ಟು ಭಿನ್ನವಾಗಿ ಕಾಣುತ್ತದೆ – ಇಂದು ಇಲ್ಲಿ ಆಳರಸರಿಗೆ ಸೇರಿದ್ದ ಆಯುಧಗಳ ಸಂಗ್ರಹವಿದೆ. ಅಕಬರ ಬಾದಶಹನ ಕಾಲದಲ್ಲಿ ಅವನ ಒಬ್ಬ ಸೇನಾಪತಿಯಾಗಿದ್ದ ಈ ಮನೆತನಕ್ಕೆ ಸೇರಿದ ಮಹಾರಾಜಾ ಮಾನಸಿಂಗರು ಉಪಯೋಗಿಸಿದ್ದ ಖಡ್ಗವು ಈ ಸಂಗ್ರಹದಲ್ಲಿದೆ. ಅದರ ತೂಕ 5 ಕಿಲೋ. ಅದೊಂದು ನೋಡಬೇಕಾದ ವಸ್ತು. ಮಾನಸಿಂಗರು ಸವಾಯಿ ಜಯಸಿಂಗರ ಮಗ, ಏಳಡಿ ಎತ್ತರದ ಆಳು, 250 ಕಿಲೋ ವಜನದ ಮನುಷ್ಯ. ಅವರು ತೊಡುತ್ತಿದ್ದ ಬಟ್ಟೆಗಳು ಸಂಗ್ರಹಾಲಯದಲ್ಲಿ ನೋಡಲು ವಿಚಿತ್ರ ವಸ್ತುಗಳೇ.

**ಮುಬಾರಕ್ ಮಹಲ್**

ಈ ಆವಾರದಲ್ಲಿಯೇ ಇರುವ ಇನ್ನೊಂದು ಕಟ್ಟಡ 'ಮುಬಾರಕ್ ಮಹಲ್'. ಇದು ರಾಜಮನೆತನದ 'ಅತಿಥಿಗೃಹ'. ಇದು ನಿರ್ಮಾಣವಾದುದು ಇತ್ತೀಚೆಗೆ 1900ರಲ್ಲಿ. ಮಹಾರಾಜಾ ಸವಾಯಿ ಮಾಧೋ ಸಿಂಗ (ದ್ವಿತೀಯ) ನಿರ್ಮಿಸಿದ್ದು, ಇಲ್ಲಿ ಸಂಗಮವರಿ ಕಲ್ಲಿನಲ್ಲಿ ಕೆತ್ತಿದ ನಕ್ಷೆ ನೋಡುವಂತಹದು. ಕಟ್ಟಡದ ನಕ್ಷೆಯೂ ಅಂದವಾಗಿದೆ. ಈಗ ಅದು ಈ ರಾಜ – ಮಹಾರಾಜರು, ರಾಣಿಯರು ಉಟ್ಟ ಉಡುಪು, ಧರಿಸಿದ ವಸ್ತುವಡವೆಗಳ ಸಂಗ್ರಹಾಲಯ. ಈ ರಾಜಮನೆತನದಲ್ಲಿ ಆಳಿದ ಮಾನಸಿಂಗರು ಧರಿಸಿದ ಪೋಷಾಕು ನೋಡಿದರೆ ಅವರೆಂಥ ಆಜಾನುಬಾಹು ಆಗಿದ್ದರೆಂದು ಊಹಿಸಬಹುದು; ನೋಡುತ್ತಿದ್ದಂತೆ ವಿವರಕರು (guides) ಒಬ್ಬೊಬ್ಬರ ಬಟ್ಟೆಗಳನ್ನೂ ವಿವರಿಸುತ್ತಾರೆ. "ನೋಡಿ ಆ ಘಾಗರಾ (ಲಂಗ) ಆ ರಾಣಿ ಧರಿಸಿದ್ದು. ಅದು 32 ಗಜ ಬಟ್ಟೆಯಿಂದ ತಯಾರಿಸಿದ್ದು. ಅದು ನೋಡಿ ಆ ಚೋಳಿ ನಿಜ ಭಂಗಾರದ ಎಳೆಯಿಂದಲೇ ಕಸೂತಿ



1 ಅಮೇರ – ಹಳೆಯ ರಾಜಧಾನಿ.

2 ನಿಮ್ಮ ಸ್ವಾಗತಕ್ಕೆ ನಿಂತ ಆನೆಗಳು.

3 ಅಮೇರ ಅರಮನೆಯಲ್ಲಿನ ಗಣೇಶ ಪೋಳ.

ಹಾಕಿದ ನಕ್ಷೆ. ನಿಜವಾದ ಮುತ್ತುಗಳಿಂದಲೆ ಹೂವು ಮಾಡಿದ್ದಾರೆ..." ಎಂದು ಮುಂತಾಗಿ ವರ್ಣಿಸುತ್ತಾರೆ. ಅಂದು ಆ ಆಳರಸರು ಅನುಭವಿಸಿದ ವೈಭವವನ್ನು ಕಣ್ಣೆದುರು ತಂದು ನಿಲ್ಲಿಸುತ್ತಾರೆ.



### ಹವಾ ಮಹಲ್

ಜಯಪುರ ಎಂದೊಡನೆ, ಕಣ್ಣೆದುರು ಒಂದು ನಿಲ್ಲುವ ಚಿತ್ರವೇ "ಹವಾ ಮಹಲ್". ಕಾರಣ ವಿಷ್ಟೆ – ಜಯಪುರ – ರಾಜಸ್ಥಾನ ವಿಷಯ ವಾಗಿ ಹೇಳುವಾಗ, ಪ್ರಚಾರಿಸುವಾಗ ಈ ಕಟ್ಟಡ ಚಿತ್ರವನ್ನು ಒಂದು 'ಸಿಂಬಲ್' (ಸಂಕೇತ) ಆಗಿ ಉಪಯೋಗಿಸಲಾಗುತ್ತಿದೆ. ಇದು ಅರಮನೆಯ ಆವಾರದಿಂದ ಆಚೆ ಇದೆ. 5 ಅಂತಸ್ತಿನ ಈ ಕಟ್ಟಡ ಒಂದು ವಿಶೇಷ ನಕ್ಷೆಯಿಂದ ಸಿದ್ಧ ವಾದದ್ದು. ಎದುರಿನಲ್ಲಿ ಒಂದೂ ಬಾಗಿಲಿಲ್ಲ. ಇರುವುದು ಮಾತ್ರ ಚಿಕ್ಕ ಚಿಕ್ಕ ನಕ್ಷೆ ವ ಜಾಳಿಗೆ ಯಿಂದ ಕೂಡಿದ ಕಂಡಿಗಳು ಮಾತ್ರ. ಈ ಕಟ್ಟ ಡದ ಉದ್ದೇಶವೇ ಇನ್ನೊಂದು ವಿಶೇಷ. ರಾಣಿ ಯರು, ಅರಮನೆಯ ಮಹಿಳೆಯರು ಊರಲ್ಲಿ ನಡೆಯುವ ಉತ್ಸವ, ಹಬ್ಬ, ಮೆರವಣಿಗೆ ಗಳನ್ನು ಇಲ್ಲಿ ಮರೆಯಾಗಿ ಕುಳಿತು ನೋಡುವ ಅನುಕೂಲತೆಗಾಗಿಯೇ ನಿರ್ಮಿಸಿದ ಮಹಲೇ ಇದು. ಗುಲಾಬಿನಗರದ ಮಧ್ಯೆ ಒಂದು ಮುಖ್ಯ ಬೀದಿಯಲ್ಲೇ ಇದೆ. ರಾಜಸ್ಥಾನದ ಹಬ್ಬಗಳ ಆಚರಣೆಗೂ ಒಂದು ಚಂದ. ವಿವಿಧ ಕಾಲದಲ್ಲಿ ಬೇರೆ ಬೇರೆ ಹಬ್ಬಗಳನ್ನು ಬಹು ವಿಜೃಂಭಣೆ ಯಿಂದ ಆಚರಿಸುತ್ತಾರೆ.

ಇದನ್ನು ನಿರ್ಮಿಸಿದವರು ಸವಾಯಿ ಪ್ರತಾಪ ಸಿಂಗರು. ಕ್ರಿ. ಶ. 1799ರಲ್ಲಿ.



# ಗುಲಾಬಿನಗರ ಜಯಪುರ

### ಆಲ್ಬರ್ಟ್ ಹಾಲ್

ಅಂದು ಆಂಗ್ಲರು, ಭಾರತದಲ್ಲಿ ಭದ್ರವಾದ ಮೇಲೆ ನಿರ್ಮಿಸಿದ ಕಟ್ಟಡ ಇದು. ಆಲ್ಬರ್ಟ್ ರಾಜಕುಮಾರ **(Prince Albert of Wales)** ಇಲ್ಲಿ ಬಂದುದರ ನೆನಪಿಗಾಗಿ ನಿರ್ಮಾಣವಾದುದು 1876ರಲ್ಲಿ. ಮಹಾರಾಜಾ ರಾಮಸಿಂಗ (ದ್ವಿತೀಯ)ರು ಕಟ್ಟಿಸಿದ್ದು. ಇಂದು ಇದೊಂದು ಉತ್ತಮ ವಸ್ತು ಸಂಗ್ರಹಾಲಯ; ಉತ್ತಮ ನಕ್ಷೆಯಿಂದ ಕೂಡಿದೆ.

### ಜಲಮಹಲ್

ಇದು ಬೇಸಿಗೆಯ ಐಷಾರಾಮದ ಜಾಗೆ. ಒಂದು ಸರೋವರದ ಮಧ್ಯ ನಿರ್ಮಾಣವಾದ ಮಂದಿರ. ಆದರೆ ಈಗ ಅದು ಉಳಿದ ಕಟ್ಟಡಗಳಂತೆ ಸುವ್ಯವಸ್ಥಿತ ಸ್ಥಿತಿಯಲ್ಲಿಲ್ಲ.. ಅಲ್ಲಿಯವರೆಗೆ ಹೋಗುವುದೂ ಆಗುವುದಿಲ್ಲ. ಬೇಸಿಗೆ, ಚಳಿಗಾಲದಲ್ಲಿ ಸುತ್ತ ತುಂಬಿದ ನೀರು ಇರುವುದಿಲ್ಲ. ದೂರದಿಂದಲೇ ಕಾಣುತ್ತದೆ. ಇದನ್ನು ನಿರ್ಮಿಸಿದವರೂ ಪ್ರತಾಪಸಿಂಗರೇ. ಬೇಸಿಗೆಯಲ್ಲಿ, ತಂಪು ಹವೆಯ ಮಧ್ಯೆ, ನೀರಿನ ಮಧ್ಯೆ ರಾಜರು ಮೋಜು ಮಾಡುತಿದ್ದ ತಾಣವಿದು. ಮದ್ಯ-ಮಾನಿನಿ-ಸಂಗೀತ ನೃತ್ಯಗಳು ನಡೆಯುತ್ತಿದ್ದ ಜಾಗೆ ಎಂದು ಓದಿದ ನೆನಪು.

ಈ ರೀತಿಯಾಗಿ ಹಿಂದಿನ ವಾಸ್ತುಶಿಲ್ಪಗಳು, ಇತ್ತಿತ್ತಲಾಗಿ ನಿರ್ಮಾಣವಾದ ಭವನಗಳು ಜಯಪುರದ ತುಂಬ ತುಂಬಿವೆ, ಮೊನ್ನೆ ಮೊನ್ನೆಯವರೆಗೆ ರಾಜರುಗಳ ವಾಸಸ್ಥಾನವಾಗಿದ್ದ – "ರಾಮಬಾಗ ಪ್ಯಾಲೇಸ" ಇಂದು ಒಂದು ಹೊಟೇಲ್ ಆಗಿ ಪರಿವರ್ತಿತವಾಗಿದ್ದು ತಾಜ ಹೊಟೇಲ್ ಸಮೂಹದವರು ನಡೆಸುತ್ತಾರೆ.

'ಜಯಪುರ'ವನ್ನು ನಿರ್ಮಿಸಿದ ಜಯಸಿಂಗರು ಮೇಧಾವಿ ರಾಜರಂತೂ ಆಹುದು. ಕಲೆ, ಸಾಹಿತ್ಯಗಳಲ್ಲಿಯೂ ಅವರಿಗಿದ್ದ ಆಸ್ಥೆ ಅಭಿಮಾನ ನೆನಸುವಂತಹುದು, ಅವರ ಒಂದು ಚಾಣಾಕ್ಷತನವನ್ನು ಇಲ್ಲಿ ನೆನೆಸಬಹುದು. ಅವರು

1

2



ಪಟ್ಟಕ್ಕೆ ಬಂದ ಸಮಯ, ರೂಢಿಯ ಪ್ರಕಾರ ಹೊಸದಾಗಿ ಪಟ್ಟಕ್ಕೆ ಬಂದ ರಾಜರು ದಿಲ್ಲಿಯ ಬಾದಶಹನಿಗೆ – ಕಾಣಿಕೆ ಸಲ್ಲಿಸಿ ಮರ್ಯಾದೆ ಮಾಡಬೇಕು. ಹಾಗೆ, ಜಯಸಿಂಗರ ಪಟ್ಟಾಭಿ ಷೇಕವಾದ ಮೇಲೆ – ದಿಲ್ಲಿಗೆ ಹೋಗುತ್ತಾರೆ. ಆಗ ಆಳುತ್ತಿದ್ದವನು ಔರಂಗಜೇಬ. ಜಯ ಸಿಂಗರು ತುಂಬಿದ ದರ್ಬಾರದಲ್ಲಿ ಎದ್ದು ಕಾಣಿಕೆ ಸಲ್ಲಿಸಲು ಕೈ ಮುಂದುಮಾಡುತ್ತಾರೆ, ಆಗ ಒಮ್ಮಿಂದೊಮ್ಮೆಲೇ ಔರಂಗಜೇಬನು ಇವರನ್ನು ಕಂಡು ಕುಪಿತನಾಗುತ್ತಾನೆ. ಕಣ್ಣು ಕೆಂಪೇರು ತ್ತವೆ. ಸಿಂಹಾಸನದಿಂದ ಕೆಳಗಿಳಿದವನೇ ಜಯ ಸಿಂಗರ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದು "ನಿನ್ನ ವಂಶಜರು ನಮಗೆ ಸಾಕಷ್ಟು ತೊಂದರೆ ನೀಡಿದ್ದಾರೆ. ನಮ್ಮ ಆಜ್ಞೆಗಳನ್ನು ತಿರಸ್ಕರಿಸಿ ದ್ದಾರೆ. ಅವರು ನಮ್ಮ ಅಭಿಮಾನಿಗಳು ಆಗಿರ ಲಿಲ್ಲ..." ಮುಂತಾಗಿ ಚೀರಾಡುತ್ತಾನೆ, "ಹೇಳು ಇಂಥ ಪ್ರಸಂಗದಲ್ಲಿ ನಿನಗಾವ ರೀತಿಯಲ್ಲಿ ನಾನು ಸಹಾಯ ಮಾಡಲು ಸಾಧ್ಯ..." ಎಂದು ಕಿರು ಚುತ್ತಲೇ ಜಯಸಿಂಗರ ಕೈಗಳನ್ನು ಕೋಪದಲ್ಲಿ ಅಮುಕುತ್ತಾನೆ. "ನೋಡು ಈಗ ನಿನ್ನ ಕೈಗಳು ಯಾವ ಉಪಯೋಗಕ್ಕೆ ಬರುತ್ತವೆ" ಎನ್ನು ತ್ತಾನೆ. ಈ ಪ್ರಸಂಗವನ್ನು ಕಂಡ ಜಯಸಿಂಗರು ಹೌಹಾರುತ್ತಾರೆ. ಇದೇನು? ತಾನು ಬಂದು ದೇತಕ್ಕೆ? ನಡೆಯುತ್ತಿರುವುದೇನು? ಎಂದು ಬಹಳ ಸಂತಾಪ ಪಡುತ್ತಾರೆ. ಮನದಲ್ಲಿ ತಾವೂ ಕುಪಿತರಾಗುವುದು ಈಗ ಸರಿಯಲ್ಲ ಎಂದು ಯೋಚಿಸಿ ನಮ್ರವಾಗಿಯೇ ಉತ್ತರಿಸುತ್ತಾರೆ:

1 ಶೀಷ್ ಮಹಲ್ – ಎಲ್ಲ ಚಿತ್ತಾರ, ನಕ್ಷೆ ಗಾಜಿನಲ್ಲೆ.

2 ಶೀಷ್ ಮಹಲಿನ ಒಂದು ಭತ್ತಿನಲ್ಲಿ ಗಾಜಿನಿಂದ ತುಂಬಿದ ನಕ್ಷೆ.

3 ಗಾಜಿನಲಂಕಾರದ ಒಂದು ನಿಕಟ ನೋಟ.

3





# ಗುಲಾಬಿನಗರ ಜಯಪುರ

"ಜಹಾಪನಾ, ಮದುವೆಯ ಸಮಯದಲ್ಲಿ ವರನು ವಧುವಿನ ಒಂದು ಕೈಯನ್ನು ಹಿಡಿಯುತ್ತಾನೆ. ಅದು ಅವಳನ್ನು ಜೀವವಿಡೀ ಕಾಪಾಡುವ ಚಿಹ್ನವಾಗಿರುತ್ತದೆ. ಇಂದು ನನ್ನೆರಡೂ ಕರಗಳೂ ನಿಮ್ಮ ಕೈಯಲ್ಲಿ. ನೀವು ಭಾರತದ ಬಾದಶಹ; ಇನ್ನು ನನಗಾವ ಹೆದರಿಕೆ!" ಎಂಬ ಉತ್ತರವನ್ನು ಕೇಳುತ್ತಲೆ, ಬಾದಶಹನ ಕೋಪ, ಬಿದ್ದ ನಕ್ಷತ್ರದಂತೆ ಇಳಿದುಬಿಡುತ್ತದೆ, ಈ ತರುಣ ರಾಜ ಸಂದರ್ಭಕ್ಕೆ ಸರಿಯಾಗಿ ಕೊಟ್ಟ ಉತ್ತರ, ಪ್ರತ್ಯುತ್ಪನ್ನಮತಿಯನ್ನು ನೋಡಿ ಚಕಿತನಾಗುತ್ತಾನೆ, "ನಿಜ, ನೀನು ನಿನ್ನ ವಂಶಜರಲ್ಲಿಯೇ ನಿಪುಣ. ನಿಜವಾಗಿಯೂ ನೀನು "ಸವಾಯಿ" (ಸವ್ವಾ = ಒಂದೂಕಾಲು) ಎನ್ನುತ್ತಾನೆ. ಜಯಸಿಂಗರು ಸವಾಯಿ ಜಯಸಿಂಗರಾದರು. ಆಗ ಅವರು ಆಳುತ್ತಿದ್ದ "ಅಮೇರ" (Amber) ಅರಮನೆ/ಕೋಟೆ ತಮಗೆ ಸರಿಯಾದ ತಾಣವಲ್ಲವೆಂದು ನಿರ್ಧರಿಸಿದ್ದೇ ಜಯಪುರ ನಿರ್ಮಾಣಕ್ಕೆ ಕಾರಣ.

**ಅಮೇರ-ಅರಮನೆ**

ಸವಾಯಿ ಜಯಸಿಂಗರೂ ಈ ಕೋಟೆಯಿಂದಲೇ ಕೆಲಕಾಲ ರಾಜ್ಯವಾಳಿದ್ದಾರೆ. ಇದು 'ದುಂಧರ' ರಾಜಮನೆತನದ ರಾಜಧಾನಿಯಾಗಿತ್ತು. ಇವರೇ ನಂತರ 'ಕಛವಾ' ಎಂದು ಕರೆಸಿಕೊಂಡವರು. "ಅಂಬಿಕೇಶ್ವರ" ಈ ಮೂಲದಿಂದಲೇ ಈ ಅಮೇರ ಹೆಸರು ಬಂದುದು ಎಂದೂ, ಅಯೋಧ್ಯೆಯ ಒಬ್ಬ ರಾಜ 'ಅಂಬರೀಷ'ನ ನಿಮಿತ್ತವಾಗಿ ಬಂದಿದೆ ಎಂದೂ ಅನ್ನುತ್ತಾರೆ. ಆದರೆ ಈ ಕೋಟೆಯಲ್ಲಿ ಐತಿಹಾಸಿಕ ಪುರಾವೆ ಸಿಗುವುದು ಕ್ರಿ. ಶ. 954ರಷ್ಟು ಹಿಂದಿನದು. ಆ ಕಾಲದಲ್ಲಿ "ಸುಸ್ವಾತ್‌ಮಿನಾ" ಆದಿವಾಸಿಗಳು ಇಲ್ಲಿ ಆಳಿದ್ದರೆಂಬುದಕ್ಕೆ ಆಸ್ಪದ ಮಾಡಿಕೊಡುತ್ತದೆ. ಈ ಆದಿವಾಸಿಗಳ ವಂಶ ಈ ಭಾಗದಲ್ಲಿ ಇನ್ನೂ ಕಂಡುಬರುತ್ತದೆ. 11ನೇ ಶತಮಾನದ ಮಧ್ಯದಲ್ಲಿ ಈ ಅರಮನೆ 'ಕಛವಾ' ರಾಜಮನೆತನದವರ ಕೈಗೆ ಬಂತು. ಆನಂತರ

1



6ಶತಕಗಳ ಕಾಲ ಜಯಪುರ ನಿರ್ಮಾಣವಾಗುವ ವರೆಗೂ ಅವರು ಇಲ್ಲಿಂದಲೇ ರಾಜ್ಯವಾಳಿದ್ದಾರೆ.

**ಅರಮನೆ**

ಈಗಿರುವ ವಾಸ್ತುಶಿಲ್ಪದ ಮಹತ್ವದ ಕಟ್ಟಡವಾದ ಇಲ್ಲಿಯ ಅರಮನೆ 17ನೇ ಶತಮಾನದ ಆದಿಯಲ್ಲಿ ಪ್ರಾರಂಭವಾದುದು ಸವಾಯಿ ಜಯಸಿಂಗರ ಕಾಲಕ್ಕೆ ಮುಗಿದಿದೆ. ಸಾಧಾರಣ ಒಂದು ಶತಮಾನದ ನಂತರದ ಇಲ್ಲಿಯ ಎಲ್ಲ ಕಟ್ಟಡಗಳೂ ಸುಂದರವಾಗಿವೆ. ನೋಟಕನ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ಇಂದಿಗೂ ಅವು ಅಂದವಾಗಿಯೇ ಇವೆ. ಇವನ್ನೆಲ್ಲ ಕಂಡಾಗ ಸವಾಯಿ ಜಯಸಿಂಗ ಇಷ್ಟು ಸುಂದರವಾದ ಅರಮನೆಯನ್ನು ಬಿಟ್ಟು ಹೊಸದನ್ನೇಕೆ ನಿರ್ಮಿಸಲು ಪ್ರಯತ್ನಿಸಿದರು? ಎಂದು ಯಾರಿಗೂ ಸಂದೇಹ ಬಾರದೇ ಇರದು.

ಈ ಅರಮನೆಯಿದ್ದುದು ಕಲ್ಲುಗುಡ್ಡದ ಮೇಲೆ. ಕೆಳಗಿರುವ ಸರೋವರದಲ್ಲಿ ಅದರ ಪ್ರತಿಬಿಂಬವನ್ನು ನೋಡುವುದೇ ಒಂದು ಆನಂದ. ನಡೆದು ಮೇಲೆ ಹೋಗಲು ಕಾಲುದಾರಿಯೂ ಇದೆ. ಜೀಪಿನಲ್ಲೂ ಹೋಗಬಹುದು. ಆನೆಗಳ

1 ಅಮೇರ ಕೋಟೆಯಲ್ಲಿನ ಮಯೂರ ಸಿಂಹಾಸನ.

2 ಗಾಜಿನಲಂಕಾರದ ಇನ್ನೊಂದು ದೃಶ್ಯ.

1



ಮೇಲೆ ಕುಳಿತೂ ಹೋಗಲಿಕ್ಕಾಗುತ್ತದೆ. ಅಲಂಕರಿಸಿದ ಆನೆಗಳು, ಸಿಂಗರಿಸಿಕೊಂಡ ರಾವುತರು, ನಿಮ್ಮ ಸ್ವಾಗತಕ್ಕಾಗಿ ಕಾದಿರುತ್ತಾರೆ. ಆನೆ ಮೇಲೆ ಹೋದರೆ, ಇಂದು ರಾಜರೇ ಇಲ್ಲದ ನಾಡಿನಲ್ಲಿ ನೀವೇ ರಾಜರು. ಒಂದಿಷ್ಟು ಹಣ ಜಾಸ್ತಿ ಹೋಗುತ್ತದೆ ಅಷ್ಟೆ!

ಮೇಲೆ ಹೋದರೆ ಸರಿ, 'ಸಿಂಗಪೋಳ' ಎಂಬೆರೆಡು ಅವಳಿ ದ್ವಾರಗಳು ನಿಮ್ಮನ್ನು ಸ್ವಾಗತಿಸಿ ಬರಮಾಡಿಕೊಳ್ಳುತ್ತವೆ. ಒಳ ಹೋದರೆ ಅಲ್ಲಿ ದೊಡ್ಡ ಬಯಲು. ಅಲ್ಲಿ ಈಗ ಪ್ರವಾಸಿಕರಿಗಾಗಿ ಕೆಲ ಅಂಗಡಿಗಳೂ ಇವೆ. ಒಳಹೋದಂತೆ ನೀವು ಇನ್ನೊಂದು ಲೋಕವನ್ನೇ ಸೇರುತ್ತೀರಿ. ಅದೇನು ಅಲ್ಲಿಯ ಕುಸುರಿನ ಕೆಲಸ! ಬಣ್ಣಬಣ್ಣದ ಸಂಗಮವರಿ ಕಲ್ಲಿನಲ್ಲಿ ಕೊರೆದ ನಕ್ಷೆಗಳೇನು! ಛೆ; ಅವನ್ನು ವರ್ಣಿಸಲು ಅಸಾಧ್ಯವಾದ ಮಾತು.

"ದಿವಾನ್ ಇ ಆಮ್" ಇದು ಪ್ರಜೆಗಳನ್ನು ಕಾಣುವ ಸ್ಥಳ. ಅನಂತರ ಸಿಗುವುದು "ದಿವಾನ್-ಇ-ಖಾಸ" ರಾಜಮನೆತನದವರಿಗೇ ಮೀಸಲಾದ ಸ್ಥಳ. ಬಹಳ ಅಂದವಾಗಿ ನಿರ್ಮಾಣವಾದ ಕಟ್ಟಡವಿದು. ಶೀಷ್‌ಮಹಲ್ ಗಾಜಿನಲ್ಲಿ – ಬಣ್ಣಬಣ್ಣದ ಗಾಜಿನಲ್ಲಿ – ನಕ್ಷೆಯನ್ನು ನಿರ್ಮಿಸಿದ್ದನ್ನು ನೋಡಿ ನೋಟಕನಲ್ಲಿ ರೋಮಾಂಚನವೇಳುತ್ತದೆಂದರೆ ಅತಿಶಯೋಕ್ತಿಯಾಗದು. ಈ ಮಹಲಿನ ಎಲ್ಲೆಡೆಯಲ್ಲೂ ಕಾಜಿನ ಅಲಂಕಾರ. ಕತ್ತಲಲ್ಲಿ ಒಂದು ಚಿಕ್ಕ ಮುಂಬತ್ತಿಯನ್ನು ಹೊತ್ತಿಸಿದರೂ ಸಾಕು, ಬಿಂಬ ಪ್ರತಿಬಿಂಬಗಳಿಂದ ಝಗಝಗಿಸುತ್ತದೆ ಈ ಮಹಲು.

"ಗಣೇಶ ಪೋಳ್" ಒಂದು ದ್ವಾರ. ಇಲ್ಲಿ ನಕ್ಷೆಯಷ್ಟೇ ಅಲ್ಲ, ವರ್ಣರಂಜಿತ ಚಿತ್ರಗಳೂ ಅಲಂಕಾರವಾಗಿವೆ. ಇಲ್ಲಿಯ ಸಂಗಮವರಿ ಕಲ್ಲಿನಲ್ಲಿ ಕೊರೆದ ನಕ್ಷೆಯ ಜಾಳಿಗೆಗಳು ಬಹಳ ಅಂದವಾಗಿವೆ. ಈ ಜಾಳಿಗೆಗಳು ಪರದೆಯಂತಿವೆ. ಇಲ್ಲಿ ಕುಳಿತು ರಾಣಿಯರು ಸಭಾಂಗಣದಲ್ಲಿ ನಡೆಯುವ ಕಾರ್ಯಗಳನ್ನು ಯಾರಿಗೂ ತಿಳಿಯದೇ ವೀಕ್ಷಿಸುತ್ತಿದ್ದರಂತೆ. ಈ ರೀತಿಯಾಗಿ ಈ ಕೋಟೆಯಲ್ಲಿರುವ ಎಲ್ಲ ಕಟ್ಟಡಗಳೂ ವಿಶಿಷ್ಟವಾದ ಅಲಂಕಾರಗಳನ್ನು ಹೊತ್ತು ನಿಂತಿವೆ.

ಹಿಂದಿನರಸರೇ ನಿರ್ಮಿಸಿದ ದೇವಸ್ಥಾನವೂ ಒಂದು ಈ ಕೋಟೆಯಲ್ಲಿದ್ದು ಇಂದಿಗೂ ಸರಿಯಾಗಿ ಪೂಜೆ ಪುನಸ್ಕಾರ ನಡೆಯುತ್ತಿರುವುದೂ ಒಂದು ವಿಶೇಷ.

ಯಾತ್ರಿಕರಿಗಾಗಿ ಸರಕಾರದ ಬಸ್ಸಿನ ಅನುಕೂಲಗಳಿವೆ. ಆದರೆ ವಿವರವಾಗಿ ನೋಡಿ ಆನಂದಿಸಬೇಕೆನ್ನುವವರಿಗೆ ಪ್ರತ್ಯೇಕ ವ್ಯವಸ್ಥೆ ಮಾಡಿಕೊಳ್ಳುವುದೇ ಉತ್ತಮ. ಇವನ್ನೆಲ್ಲ ಪ್ರತ್ಯಕ್ಷ ನೋಡಿಯೇ ಆನಂದಿಸಬೇಕು.

●

1 ಆಮೇರ ಕೋಟೆಯಲ್ಲಿನ ಒಂದು ಹೌಳಿ

2 ಆಮೇರ ಅರಮನೆಯಲ್ಲಿ ಸಂಗಮವರಿ ಕಲ್ಲಿನ ಕುಸುರು ನಕ್ಷೆಗಳಲ್ಲೊಂದರ ದೃಶ್ಯ.

2

